# 1

# ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾಗಿ ಮುಖ್ಯ ಶಿಕ್ಷಕರು

ಗ್ರಾಮೀಣ ಸರ್ಕಾರಿ ಶಾಲೆಗಳು ಎದುರಿಸುತ್ತಿರುವ ಸಮಸ್ಯೆಗಳು ಒಂದೆರಡಲ್ಲ. ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿರುವ ಮಕ್ಕಳು ಈ ಶಾಲೆಗಳಿಗೆ ಹೋಗುತ್ತಾರೆ. ಈ ಮಕ್ಕಳಲ್ಲಿ ಶೇಕಡ 50ರಷ್ಟು ಮಂದಿ ಮೊದಲ ತಲೆಮಾರಿನ ಕಲಿಕೆದಾರರಾಗಿದ್ದು, ಅವರ ಪೋಷಕರು ದಿನಗೂಲಿ ಕೆಲಸಗಾರರಾಗಿರುತ್ತಾರೆ. ಈ ಪರಿಸ್ಥಿತಿಯಲ್ಲಿ ತಮ್ಮದು ಉತ್ತಮ ಶಾಲೆಯೆಂದು ಅಲ್ಲಿನ ಮುಖ್ಯೋಪಾಧ್ಯಾಯರು ನಿರೂಪಿಸಬೇಕಾಗುತ್ತದೆ. ಶಾಲೆಯು ಮಕ್ಕಳ ಕಾಳಜಿ ವಹಿಸುತ್ತಿದೆ, ಅವರು ಚೆನ್ನಾಗಿ ಕಲಿಯುತ್ತಿದ್ದಾರೆ ಎಂಬುದನ್ನು ತೋರಿಸಬೇಕಾಗುತ್ತದೆ. ಸಮುದಾಯದೊಂದಿಗಿನ ಸಂಬಂಧವನ್ನು ಚೆನ್ನಾಗಿರಿಸಿಕೊಂಡು ಮತ್ತೆ ಮತ್ತೆ ಬಲಪಡಿಸುತ್ತ ಇರಬೇಕಾಗುತ್ತದೆ. ಜೊತೆಗೆ ಎದುರಾಗುವ ಸಮಸ್ಯೆಗಳನ್ನೆಲ್ಲ ಬಗೆಹರಿಸುತ್ತ ಸಂಪನ್ಮೂಲಗಳನ್ನು ಕ್ರೋಡೀಕರಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಈ ಮುಖ್ಯೋಪಾಧ್ಯಾಯರು ಒಂದು ಸಂಸ್ಥೆಯ ಕಾರ್ಯನಿರ್ವಹಣಾಧಿಕಾರಿಯಂತೆ ಪಾತ್ರ ನಿರ್ವಹಿಸಬೇಕಾಗುತ್ತದೆ.

ಸಮುದಾಯದೊಡನೆ ಉತ್ತಮ ಸಂಬಂಧ ಇಟ್ಟುಕೊಳ್ಳುವುದು ಹಾಗೂ ಮಕ್ಕಳು ಖಾಸಗಿ ಶಾಲೆಗಳಿಂದ ಮತ್ತೆ ತಮ್ಮ ಶಾಲೆಗೆ ಬರುವಂತೆ ಮನವೊಲಿಸುವದು ತಮ್ಮ ಮುಖ್ಯ ಕಾರ್ಯಗಳಲ್ಲಿ ಪ್ರಧಾನವಾದವುಗಳೆಂದು ಮುಖ್ಯ ಶಿಕ್ಷಕರು ಭಾವಿಸಿರುವುದನ್ನು ನಾನು ನನ್ನ ಭೇಟಿಯ ಸಮಯದಲ್ಲಿ ಕಂಡುಕೊಂಡೆ. ಈ ಕಾರ್ಯವನ್ನು ಅವರು ಸಹೋದ್ಯೋಗಿಗಳಿಗೆ ವಹಿಸದೆ ತಾವೇ ವೈಯಕ್ತಿಕವಾಗಿ ಸಮುದಾಯದೊಂದಿಗೆ ತೊಡಗಿಸಿಕೊಳ್ಳುತ್ತಿದ್ದರು. ಇದಕ್ಕಾಗಿ ತಾವು ಮಾಡಬೇಕಾದ ತ್ರಿಮುಖ ಸಂವಹನ ಕಾರ್ಯತಂತ್ರ ಏನು ಎಂಬುದು ಕ್ರಿಯಾಶೀಲ ಮುಖ್ಯ ಶಿಕ್ಷಕರಿಗೆ ತಿಳಿದಿದೆ; ಒಂದನೆಯದಾಗಿ ಶಾಲೆಯ ಕಾಣ್ಕೆ ಹಾಗೂ ಧ್ಯೇಯೋದ್ದೇಶ ಏನು ಎಂಬ ಸ್ಪಷ್ಟವಾದ ಗೊತ್ತುಗುರಿಗಳನ್ನು ರೂಪಿಸುವುದು, ಎರಡನೆಯದಾಗಿ ಸಮುದಾಯದ ಸದಸ್ಯರನ್ನು ವೈಯಕ್ತಿಕವಾಗಿ ಹಾಗೂ ಸಮೂಹದಲ್ಲಿ ಸಂಪರ್ಕಿಸಿ ಈ ಕಾಣ್ಕೆಯನ್ನು ಅವರ ಮುಂದೆ ಇರಿಸುವುದು ಹಾಗೂ ಮೂರನೆಯದಾಗಿ ಮಕ್ಕಳ ಕ್ಷೇಮಕ್ಕಾಗಿ ಹಾಗೂ ಕಲಿಕೆಗಾಗಿ ಕಾರ್ಯವೆಸಗುವ ತಮ್ಮ ಬದ್ಧತೆಯನ್ನು ವಿವಿಧ ವಿಧಾನಗಳಿಂದ ಪ್ರಚುರಪಡಿಸುವುದು.

ಈ ಕ್ರಮಗಳಿಂದ ಸಮುದಾಯವು ನಿಸ್ಸಂದೇಹವಾಗಿ ಸಕಾರಾತ್ಮಕವಾಗಿ ಪ್ರತಿಸ್ಪಂದಿಸಲು ಪ್ರಾರಂಭಿಸುತ್ತದೆ. ಇಂತಹ ಸುಗಮ ವಾತಾವರಣ ನಿರ್ಮಾಣಗೊಂಡ ಮೇಲೆ ಶಾಲೆಯ ನಿರ್ವಹಣೆಯ ಎಲ್ಲಾ ಆಯಾಮಗಳಲ್ಲಿ ನಿರಂತರ ಹಾಗೂ ಸುಸ್ಥಿರ ಸುಧಾರಣೆ ತರಲು ಮುಖ್ಯ ಶಿಕ್ಷಕರು ಇತರ ಕ್ರಮಗಳನ್ನು ಕೈಗೊಳ್ಳುತ್ತಾರೆ. ಈ ಎಲ್ಲಾ ಪ್ರಕ್ರಿಯೆಗಳಲ್ಲಿ ಸಮುದಾಯದೊಂದಿಗೆ ಪಾರದರ್ಶಕವಾದ ಸಂವಹನವನ್ನು ನಡೆಸುತ್ತಾರೆ. ಖರ್ಚು ವೆಚ್ಚದ ದಾಖಲೆಗಳನ್ನು ಎಲ್ಲರೊಂದಿಗೆ ಹಂಚಿಕೊಂಡು ಸರ್ವವೇದ್ಯವಾದ ಸುಧಾರಣೆಗಳನ್ನು ಪ್ರದರ್ಶಿಸಿ ಅವರ ವಿಶ್ವಾಸವನ್ನೂ ಭರವಸೆಯನ್ನೂ ಗಳಿಸಲು ಶಕ್ತರಾಗುತ್ತಾರೆ.

ಪೋಷಕರು ಹೆಚ್ಚು ವಿದ್ಯಾವಂತರಲ್ಲವಾದರೂ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂಬ ಹಂಬಲವನ್ನು ಉಳ್ಳವರು. ಶಾಲೆಯು ಚೆನ್ನಾಗಿ ನಡೆಯುತ್ತಿದೆಯೇ ಇಲ್ಲವೇ ಎಂಬ ಸೂಕ್ಷ್ಮ ಗ್ರಹಿಕೆ ಅವರಿಗೆ ಇರುತ್ತದೆ. ಈ ಗ್ರಹಿಕೆ ಅವರಿಗೆ ಉಂಟಾದರೆ ಮಕ್ಕಳ ಹಾಜರಿಯಲ್ಲಿ ಗಮನಾರ್ಹ ಏರಿಕೆ ಕಂಡುಬರುತ್ತದೆ. ಜೀವನ ನಿರ್ವಹಣೆಗಾಗಿ ಕುಟುಂಬದ ವಲಸೆ, ಒಡಹುಟ್ಟಿದವರನ್ನು ನೋಡಿಕೊಳ್ಳುವ ಜವಾಬ್ದಾರಿ, ವ್ಯವಸಾಯದ ಕಾಲ ಹಾಗೂ ಹಬ್ಬಗಳು ಮುಂತಾದ ಸಂದರ್ಭಗಳಲ್ಲಿ ತಮ್ಮ ಕುಟುಂಬಗಳಿಗೆ ಸಹಾಯ ಮಾಡಬೇಕಾಗಿರುವುದರಿಂದ ಹಾಜರಾತಿ ಪ್ರಮಾಣ ಕಡಿಮೆಯಾಗುತ್ತದೆ. ಇವೆಲ್ಲಾ ಒತ್ತಡಗಳ ನಡುವೆಯೂ ಬದ್ಧತೆಯುಳ್ಳ ಮುಖ್ಯ ಶಿಕ್ಷಕರು ನಿಯತ ಹಾಜರಾತಿಯ ಸಂಸ್ಕೃತಿಯನ್ನು ಸೃಷ್ಟಿ ಮಾಡಿದ್ದಾರೆ. ಮುಖ್ಯ ಶಿಕ್ಷಕರು ಮತ್ತು ಇತರ ಶಿಕ್ಷಕರು ಪ್ರತಿಯೊಬ್ಬ ಪೋಷಕರ ಮೊಬೈಲ್ ಫೋನ್ ಸಂಖ್ಯೆಗಳನ್ನು ಹೊಂದಿರುತ್ತಾರೆ. ವಿದ್ಯಾರ್ಥಿಯು ಗೈರು ಹಾಜರಾದಾಗ ಅವನ/ಳ ಪೋಷಕರನ್ನು ಸಂಪರ್ಕಿಸುತ್ತಾರೆ. ಇದು ಪೋಷಕರಿಗೆ ಅವರ ಮಕ್ಕಳನ್ನು ನಿಯತವಾಗಿ ಶಾಲೆಗೆ ಕಳುಹಿಸುವಂತೆ ಸೂಕ್ಷ್ಮವಾಗಿ ನೆನಪಿಸುವುದಷ್ಟೇ ಅಲ್ಲದೆ ಶಾಲೆಯು ಅವರ ಸ್ನೇಹಿತನಂತೆ ಮಕ್ಕಳ ಬೆಳವಣಿಗೆಯಲ್ಲಿ ಸಮಾನ ಪಾತ್ರ ವಹಿಸುತ್ತದೆಂಬುದನ್ನು ಪುಷ್ಟೀಕರಿಸುತ್ತದೆ.

ಕೆಲವು ತಿಂಗಳುಗಳ ಹಿಂದೆ ವಿಶ್ವವಿದ್ಯಾಲಯವೊಂದರ ವಿಚಾರ ಸಂಕಿರಣದಲ್ಲಿ ಅಂತಹ ಬದ್ಧತೆಯುಳ್ಳ ನಾಯಕತ್ವದ ಮೂಲ ಅಂಶಗಳನ್ನು ಪಟ್ಟಿ ಮಾಡುವಂತೆ ಕೇಳಲಾಗಿತ್ತು. ಈ ಕೆಳಗಿನ ಅಂಶಗಳನ್ನು ನಾನು ಅವರ ಮುಂದಿಟ್ಟಿದ್ದೆ:

✶ ಅನೇಕ ಶಾಲೆಗಳು ಸ್ಪಷ್ಟವಾಗಿ ನಿರೂಪಿಸಿದ ಗುರಿಗಳನ್ನು ಹೊಂದಿರಬಹುದು. ಆದರೆ ಈ ಶಾಲೆಗಳಲ್ಲಿ (ಈ ಅಧ್ಯಾಯದಲ್ಲಿ ಆ ಶಾಲೆಗಳ ಬಗ್ಗೆ ಬರೆದಿದ್ದೇನೆ) ಗುರಿಗಳು ಫಲಕದಲ್ಲೋ ಮಾತಿನಲ್ಲೋ ಕಾಣಿಸಿಕೊಂಡು ಮಾಯವಾಗುವುದಿಲ್ಲ; ಅವು ಪ್ರತಿದಿನದ ವಿವರವಾದ ಯೋಜನೆಗಳಲ್ಲಿ ಮತ್ತು ಕ್ರಿಯೆಗಳಲ್ಲಿ ಅಡಕಗೊಂಡು ಸಾಕಾರಗೊಳ್ಳುತ್ತವೆ. ಕಾಣ್ಕೆಯನ್ನು ವಾಸ್ತವಿಕತೆಯನ್ನಾಗಿ ಪರಿವರ್ತಿಸಲು ಮುಖ್ಯ ಶಿಕ್ಷಕರುಗಳು ತೋರುತ್ತಿರುವ ಈ ಬದ್ಧತೆಯ ಪ್ರಭಾವ ಶಿಕ್ಷಕರ ಕಾರ್ಯ ಮತ್ತು ಧೋರಣೆಯ ಮೇಲೆ ಆಗಿರುವುದನ್ನು ಮೇಲ್ನೋಟಕ್ಕೇ ಗುರುತಿಸಬಹುದಾಗಿದೆ.

✶ ಸಮುದಾಯದೊಂದಿಗೆ ಒಳ್ಳೆಯ ಸಂಬಂಧದ ಮಹತ್ವವೇನೆಂದು ಎಲ್ಲಾ ಮುಖ್ಯ ಶಿಕ್ಷಕರಿಗೂ ತಿಳಿದಿರುವುದೇ ಆಗಿದೆ. ಆದರೆ ತಮ್ಮ ಪರಿಶ್ರಮ ಹಾಗೂ ಮಕ್ಕಳ

ಕಲಿಕೆಯನ್ನು ಮತ್ತು ಪ್ರಗತಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ಪೋಷಕರಿಗೆ ಮುಟ್ಟಿಸುವ ಸಾಮರ್ಥ್ಯವನ್ನು ಹೊಂದಿರುವುದೇ ಪರಿಣಾಮಕಾರಿ ನಾಯಕತ್ವದ ವಿಶಿಷ್ಟ ಗುಣವಾಗಿದೆ. ಇಂತಹ ನಾಯಕ ಇರುವ ಶಾಲೆಗಳಲ್ಲಿ ಮಕ್ಕಳ ಮೇಳ, ವಾರ್ಷಿಕ ದಿನಾಚರಣೆ, ಸ್ವಾತಂತ್ರ್ಯ ದಿನಾಚರಣೆ ಮುಂತಾದ ಕಾರ್ಯಕ್ರಮಗಳನ್ನು ಸಂಪ್ರದಾಯದ ಪಾಲನೆಗಷ್ಟೆ ಎಂಬಂತೆ ಆಚರಿಸದೆ ಅವುಗಳನ್ನು ಮಕ್ಕಳ ಸರ್ವಾಂಗೀಣ ಪ್ರಗತಿಯ ಪ್ರದರ್ಶನದ ವೇದಿಕೆಗಳನ್ನಾಗಿ ಉಪಯೋಗಿಸಿಕೊಳ್ಳುತ್ತಾರೆ. ಇವುಗಳ ಪರಿಣಾಮ ಏನು ಎಂಬುದರ ಸ್ಪಷ್ಟವಾದ ಕಲ್ಪನೆಯೂ ನಾಯಕನಿಗೆ ಇರುತ್ತದೆ, ಆ ಪರಿಣಾಮ ಶಾಲೆಯ ಮಕ್ಕಳ ಹಾಜರಾತಿಯ ಹೆಚ್ಚಳದಲ್ಲಿ ಪ್ರತಿಫಲಿತವಾಗುತ್ತದೆ.

✴ ಯೋಜನೆ ಮತ್ತು ಸಿದ್ಧತೆಗಳಿಗೆ ಸಂಬಂಧಿಸಿದಂತೆ ಅವರಿಗೆ ದೈನಂದಿನ, ಮಧ್ಯಕಾಲೀನ ಹಾಗೂ ದೀರ್ಘಕಾಲಿಕ ಮುಂದಾಲೋಚನೆ ಇರುವುದನ್ನು ನಾನು ಗಮನಿಸಿದ್ದೇನೆ. ಕಾಲಕಾಲಕ್ಕೆ ಆದ್ಯತೆಗಳನ್ನು ಗುರುತಿಸಿಕೊಂಡು ಅವುಗಳನ್ನು ಜಾರಿಗೊಳಿಸುತ್ತ, ಗುರಿ ಸಾಧನೆಯ ಸಹಜ ಪ್ರಗತಿಯ ಮಾರ್ಗದಲ್ಲಿ ಸಾಗುತ್ತಾರೆ.

✴ ಶಾಲೆಯ ದೈನಂದಿನ ಕಾರ್ಯಗಳ ನಿರ್ವಹಣೆಯೊಂದಿಗೆ ಶಾಲೆಯ ನಿರ್ಣಾಯಕ ಪ್ರಕ್ರಿಯೆಗಳ ಮೇಲೆ ತಮ್ಮ ತೀಕ್ಷ್ಣ ದೃಷ್ಟಿಯನ್ನಿಟ್ಟಿರುತ್ತಾರೆ. ಬೆಳಗಿನ ಪ್ರಾರ್ಥನಾ ಸಭೆಯಿಂದ ಹಿಡಿದು ಗ್ರಂಥಾಲಯದ ನಿರ್ವಹಣೆ ಮತ್ತು ಬಳಕೆ, ಮಕ್ಕಳ ಕಲಿಕೆಯ ಪ್ರಗತಿಯ ಕೂಲಂಕಷ ದಾಖಲೆ ತಯಾರಿಕೆ ಮತ್ತು ಅವರ ಪ್ರಗತಿಯ ಬಗ್ಗೆ ಸಹ–ಶಿಕ್ಷಕರೊಂದಿಗೆ ಪರ್ಯಾಲೋಚನೆ ಮುಂತಾದ ಅನೇಕ ಕಾರ್ಯಗಳ ಜವಾಬ್ದಾರಿಯನ್ನು ಮುಖ್ಯ ಶಿಕ್ಷಕರು ವಹಿಸಬೇಕಾಗುತ್ತದೆ. ಇವೆಲ್ಲಾ ನಿಯಮಿತ ಕಾರ್ಯಗಳಾಚೆಗೆ ಹೋಗಿ ಅವರು ಅಸಾಧಾರಣವಾದ ಆಂತರಿಕ ಪ್ರೇರಣೆಯನ್ನೂ ನಾಯಕತ್ವವನ್ನೂ ಪ್ರದರ್ಶಿಸಿ, ಅನೇಕ ಕೆಲಸಗಳನ್ನು ಶಾಲೆಯ ಒಳಿತಿಗಾಗಿ ಮಾಡುತ್ತಿರುತ್ತಾರೆ. ಶಾಲೆಯ ಮೂಲಸೌಕರ್ಯಗಳಿಗೆ ಸಮುದಾಯದಿಂದ ಬೇಕಾದ ಹಣಕಾಸಿನ ವ್ಯವಸ್ಥೆ ಮಾಡುವುದು, ಮಕ್ಕಳ ಸುರಕ್ಷತೆ ಮತ್ತು ಆರೋಗ್ಯ, ಶುಚಿತ್ವಗಳ ಬಗ್ಗೆ ಎಚ್ಚರ ವಹಿಸುವುದು, ಸಮುದಾಯ, ಗ್ರಾಮ ಪಂಚಾಯ್ತಿ ಹಾಗೂ ಬ್ಲಾಕ್ ಕಚೇರಿಗಳಿಂದ ಸಂಪನ್ಮೂಲ ಕ್ರೋಢೀಕರಿಸುವುದು, ಅಗತ್ಯ ಬಿದ್ದಾಗ ತಮ್ಮ ಸ್ವಂತ ಹಣವನ್ನೇ ನೀಡುವುದು, ಮಕ್ಕಳ ಕಲಿಕೆಯ ಮೇಲೆ ನಿಗಾ ವಹಿಸುವುದು ಹಾಗೂ ವಿಶೇಷವಾಗಿ ಗಮನ ನೀಡಬೇಕಾದ ಮಕ್ಕಳ ಬಗ್ಗೆ ಹೆಚ್ಚಿನ ಆಸ್ಥೆ ವಹಿಸುವುದು – ಇವೆಲ್ಲವನ್ನೂ ನಿರ್ವಹಿಸುವ ಮೂಲಕ ಯಜಮಾನನಂತೆ ಕೆಲಸ ಮಾಡುತ್ತಾರೆ. ದೊಡ್ಡ ಶಾಲೆಗಳಲ್ಲಿ ಶಿಕ್ಷಕರ ಪಾತ್ರ ನಿರ್ಣಾಯಕವೆಂದು ಅರಿತಿರುವ ಮುಖ್ಯ ಶಿಕ್ಷಕರು, ಅವರನ್ನು ಪ್ರೋತ್ಸಾಹಿಸಿ ಮಾರ್ಗದರ್ಶನ ನೀಡುತ್ತಾರೆ; ಶಿಕ್ಷಕರು ತಮ್ಮ ನಿರಂತರ ಬೆಳವಣಿಗೆಗಾಗಿ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹಾಜರಾಗುವಂತೆ ಪ್ರೋತ್ಸಾಹಿಸುತ್ತಾರೆ.

'ಕರ್ತವ್ಯದ ಚೌಕಟ್ಟನ್ನೂ ದಾಟಿ ಕೆಲಸಮಾಡುವುದು' ಎಂಬುದು ಸಾಧಾರಣವಾಗಿ ಬಳಸುವ ಕ್ಲೀಷೆಯ ನುಡಿ. ಆದರೆ ಇದನ್ನು ಈ ಮುಖ್ಯ ಶಿಕ್ಷಕರಿಗೆ ಅನ್ವಯಿಸಿದಾಗ ಅದು ಸಾರ್ಥಕವೆನಿಸುತ್ತದೆ. ಕಷ್ಟಗಳಿಂದ ಬೇಗನೇ ಚೇತರಿಸಿಕೊಂಡು ಪುಟಿದೆದ್ದು ಸಮಸ್ಯೆಗಳಿಗೆ ಧೀರವಾದ ಜಾಣತನದ ನಿರ್ಧಾರ ಕೈಗೊಳ್ಳುವ ಚೈತನ್ಯ ಇವರಲ್ಲಿ ಕಂಡುಬರುತ್ತದೆ.